# ಕರ್ನಾಟಕ ವಿಧಾನ ಪರಿಷತ್ತು

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಬಿ.ಎಂ ಫಾರೂಖ್**

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2425**

**ಉತ್ತರಿಸಬೇಕಾದ ದಿನಾಂಕ : 30.03.2021**

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕಿನ ಕೇಂದ್ರ ಕಛೇರಿ ಸೇರಿದಂತೆ ವಿವಿಧ ಶಾಖೆಗಳ ಕಛೇರಿಗಳಲ್ಲಿರುವ ಕಂಪ್ಯೂಟರ್‌ಗಳಿಗೆ ಉಪಯೋಗಿಸುತ್ತಿರುವ ಸಾಫ್ಟವೇರ್ ಯಾವುದು; ಸದರಿ ಸಾಫ್ಟವೇರ್‌ನ್ನು ಯಾರಿಂದ ಯಾವ ದಿನಾಂಕದಂದು ಖರೀದಿಸಲಾಗಿದೆ; (ಸಂಪೂರ್ಣ ವಿವರ ನೀಡುವುದು) | ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕಿನ ಕೇಂದ್ರ ಕಛೇರಿಯಲ್ಲಿ 90 ರ ದಶಕದಲ್ಲಿ ನ್ಯಾಷನಲ್ ಇನ್ಫಾರ್ಮೆಟಿಕ್ಸ್ ಸೆಂಟರ್ (NIC), ಬೆಂಗಳೂರು ರವರು ಬ್ಯಾಂಕಿನ ಕೇಂದ್ರ ಕಛೇರಿಯ ಕಾರ್ಯ ನಿರ್ವಹಣೆಗೆಂದು ಯುನಿಕ್ಸ್ ಆಪರೇಟಿಂಗ್ ಸಿಸ್ಟಮ್ ಮತ್ತು ಓರಾಕಲ್ 7.3 ಡಾಟಾಬೇಸ್ ಹೊಂದಿರುವ ಸಾಫ್ಟವೇರ್‌ನ್ನು ಸಿದ್ದಪಡಿಸಿ ನೀಡಿರುತ್ತಾರೆ. ಸದರಿ ಸಾಫ್ಟವೇರ್ ಕೆಳಕಂಡ ಮಾಡ್ಯುಲ್‌ಗಳನ್ನು ಹೊಂದಿರುತ್ತದೆ.<br>1. ಲೋನ್ ಮಾನಿಟರಿಂಗ್ ಸಿಸ್ಟಮ್ಸ್ (ಎಲ್.ಎಮ್.ಎಸ್)<br>2. ಡಿಮಾಂಡ್, ಕಲೆಕ್ಷನ್ ಬ್ಯಾಲೆನ್ಸ್ (ಬ್ಯಾಂಕ್ ಟು ಬ್ಯಾಂಕ್ ಡಿ.ಸಿ.ಬಿ)<br>3. ಡಿಬೆಂಚರ್ ಫ್ಲೋಟೆಶನ್.<br>4. ಡಿಬೆಂಚರ್ ರಿಪೇಮೆಂಟ್.<br>5. ಪೇರೋಲ್ ಮಾಡ್ಯುಲ್ ಮತ್ತು ಇತರೆ ಮಾಡ್ಯುಲ್‌ಗಳು.<br>2011–12ನೇ ಸಾಲಿನಲ್ಲಿ ನ್ಯಾಷನಲ್ ಇನ್ಫಾರ್ಮೆಟಿಕ್ಸ್ ಸೆಂಟರ್, ಬೆಂಗಳೂರುರವರು ಹಳೆ ಸರ್ವರ್‌ನಿಂದ ಹೊಸ ಸರ್ವರ್‌ಗೆ, ವಿಂಡೋಸ್ ಆಪರೇಟಿಂಗ್ ಸಿಸ್ಟಮ್ ಮತ್ತು ಓರಾಕಲ್ 11ಜಿ ಡಾಟಾಬೇಸ್‌ಗೆ ಡಾಟಾ ಮೈಗ್ರೇಶನ್ ಮಾಡಿ ಕೊಟ್ಟಿರುತ್ತಾರೆ. ಸಧ್ಯಕ್ಕೆ ಈ ಸಾಫ್ಟವೇರ್‌ನ್ನು ಉಪಯೋಗಿಸಿಕೊಂಡು ತ:ಖ್ತೆಗಳನ್ನು ತಯಾರಿಸಿ ಶಾಖಾ ಕಛೇರಿಗೆ ಅದರ ಪ್ರತಿಗಳನ್ನು ಅಂಚೆ ಮೂಲಕ ಕಳುಹಿಸುತ್ತಿದ್ದು, ಶಾಖಾ ಕಛೇರಿಗಳಲ್ಲಿ ಯಾವುದೇ ಸಾಫ್ಟವೇರ್‌ನ್ನು ಅಳವಡಿಸಿರುವುದಿಲ್ಲ. ಎಲ್ಲಾ ಶಾಖಾ ಕಚೇರಿಗಳಿಗೂ ಕಂಪ್ಯೂಟರ್ ಮತ್ತು ಪ್ರಿಂಟರ್‌ಗಳನ್ನು ಒದಗಿಸಿದ್ದು, ಅವುಗಳನ್ನು ಶಾಖಾ ಕಛೇರಿ ಹಂತದ ಕಾರ್ಯ ನಿರ್ವಹಣೆಗೆ ಉಪಯೋಗಿಸಲಾಗುತ್ತಿದೆ. |

| | | |
|---|---|---|
| ಆ | ಇತ್ತೀಚಿಗೆ ಸದರಿ ಬ್ಯಾಂಕಿನ ಕೇಂದ್ರ ಕಛೇರಿಯ ಕಂಪ್ಯೂಟರ್‌ಗಳಿಗೆ ಸಾಫ್ಟವೇರ್ ತಯಾರಿಸಲು ನ್ಯಾಷನಲ್ ಇನಾಫಾರ್ಮಟಿಕ್ ಸೆಂಟರ್‌ರವರಿಗೆ ಸುಮಾರು 28 ಲಕ್ಷ ರೂಪಾಯಿ ಮೊತ್ತವನ್ನು ಯಾವುದೇ ಎಂ.ಓ.ಯು ಮಾಡಿಕೊಳ್ಳದೆ ಪಾವತಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಹಿಂದೆ ಮ್ಯಾನ್ ಪವರ್ ಇಲ್ಲವೆಂದು ಸಾಫ್ಟವೇರ್ ಮಾಡಲು ನಿರಾಕರಿಸಿದ ನ್ಯಾಷನಲ್ ಇನಾಫಾರ್ಮಟಿಕ್ ಸೆಂಟರ್‌ರವರಿಗೆ ಅಕ್ರಮವಾಗಿ 28 ಲಕ್ಷ ರೂಪಾಯಿಗಳನ್ನು ಪಾವತಿಸಿರುವ ಅಧಿಕಾರಿ ಯಾರು; ಯಾವ ದಿನಾಂಕದಂದು ಸದರಿ ಮೊತ್ತವನ್ನು ಪಾವತಿಸಲಾಗಿರುತ್ತದೆ; (ಮಾಹಿತಿ ಒದಗಿಸುವುದು) | ರಾಜ್ಯದ ಎಲ್ಲಾ ಪಿಕಾರ್ಡ್ ಬ್ಯಾಂಕುಗಳು ಹಾಗೂ ಕೇಂದ್ರ ಕಚೇರಿಯ ಎಲ್ಲಾ ಶಾಖೆಗಳ ಮತ್ತು ಕೇಂದ್ರ ಕಚೇರಿಯ ವ್ಯವಹಾರಗಳಿಗೆ ಸಂಬಂಧಿಸಿದಂತೆ ದಿ:23.09.2016 ರಂದು ನಡೆದ ಆಡಳಿತ ಮಂಡಳಿ ಮತ್ತು ದಿ:16.05.2017 ರಂದು ನಡೆದ ಕಾರ್ಯಕಾರಿ ಸಮಿತಿ ಸಭೆಯ ತೀರ್ಮಾನದಂತೆ ನ್ಯಾಷನಲ್ ಇನ್ಫಾರ್ಮೆಟಿಕ್ಸ್ ಸೆಂಟರ್ (NIC) ನವದೆಹಲಿ ಇವರಿಂದ ಏಕರೂಪ ತಂತ್ರಾಂಶವನ್ನು ಪಡೆಯಲು ತೀರ್ಮಾನಿಸಲಾಗಿರುತ್ತದೆ.<br><br>NIC ನವದೆಹಲಿರವರು ಈ ಯೋಜಗೆ ರೂ.72.26 ಲಕ್ಷಗಳು ವೆಚ್ಚವಾಗುವುದಾಗಿ ತಿಳಿಸಿದ್ದು, ಅವರು ನೀಡಿದ Proforma Invoice ನಲ್ಲಿ Placement of work-order shall be after receiving 100% Advance Payment from user department/client through RTGS/NEFT or Demand Draft/cheque as per the details mentioned above ಎಂದು ತಿಳಿಸಿರುತ್ತಾರೆ.<br><br>ಯೋಜನಾ ವೆಚ್ಚದ ಮಾಹಿತಿಯನ್ನು ದಿ:03.08.2018 ರಂದು ನಡೆದ ಆಡಳಿತ ಮಂಡಳಿ ಸಭೆಯ ಗಮನಕ್ಕೆ ತರಲಾಗಿದ್ದು, ಸಭೆಯಲ್ಲಿ ಯೋಜನಾ ವೆಚ್ಚದ ಶೇ.40% ರಷ್ಟು ಮೊತ್ತವನ್ನು ಮುಂಗಡವಾಗಿ ಪಾವತಿಸಲು ತೀರ್ಮಾನಿಸಲಾಗಿರುತ್ತದೆ. ಅದರಂತೆ ರೂ.28.90 ಲಕ್ಷಗಳನ್ನು ದಿ:23.08.2018 ರಂದು ಹಣಕಾಸು ವಿಭಾಗದಿಂದ RTGS ಮುಖಾಂತರ ಪಾವತಿಸಲಾಗಿರುತ್ತದೆ. Functional Description Document (FDD) finalize ಮಾಡಿದ ನಂತರ MOU ಮಾಡಿಕೊಡುವುದಾಗಿ ಎನ್.ಐ.ಸಿ ಅಧಿಕಾರಿಗಳು ತಿಳಿಸಿರುತ್ತಾರೆ.<br><br>ಯೋಜನಾ ವೆಚ್ಚದ ಶೇ.40% ರಷ್ಟು ಮೊತ್ತವನ್ನು ಮುಂಗಡವಾಗಿ ಪಾವತಿಸಿರುವ ಬಗ್ಗೆ MOU ಮಾಡಿಕೊಳ್ಳಲು ದಿ:19.12.2018 ಮತ್ತು 15.03.2019 ರ ಇ-ಮೇಲ್‌ಗಳಲ್ಲಿ ತಿಳಿಸಲಾಗಿರುತ್ತದೆ. NIC ದೆಹಲಿಯವರಿಗೆ ಪತ್ರ ಸಂಖ್ಯೆ:TMER/MIS/30/2019-20, dated:18-12-2019, TMER/MIS/110/2019-20, dated:18-02-2020 ರಲ್ಲಿ GOK interest subsidy with example, own fund, user manual and service level agreement (MOU) ಗಳ ಮಾಹಿತಿಗಳನ್ನು ಕೇಳಲಾಗಿರುತ್ತದೆ. |

| | | |
|---|---|---|
| | | ಈ ಹಿಂದೆ ಮಾನವ ಸಂಪನ್ಮೂಲ ಕೊರತೆ ಇರುವುದರಿಂದ ಬ್ಯಾಂಕಿಗೆ ತಂತ್ರಾಂಶವನ್ನು ಒದಗಿಸಲು ಸಾಧ್ಯವಾಗುವುದಿಲ್ಲವೆಂದು NIC ಬೆಂಗಳೂರು ವಲಯ ಕಛೇರಿಯವರು ತಿಳಿಸಿರುತ್ತಾರೆ. ಆದರೆ NIC ನವದೆಹಲಿಯವರು ಪಂಜಾಬ್ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳಿಗೆ ಏಕರೂಪ ತಂತ್ರಾಂಶವನ್ನು ಒದಗಿಸಿರುವ ಹಿನ್ನಲೆಯಲ್ಲಿ, ಇವರಿಂದ ರಾಜ್ಯದ ಬ್ಯಾಂಕುಗಳಿಗೆ ತಂತ್ರಾಂಶವನ್ನು ಪಡೆದುಕೊಳ್ಳುವ ಯೋಜನೆ ಕಾರ್ಯವನ್ನು ಹಮ್ಮಿಕೊಳ್ಳಲಾಗಿತ್ತು. |
| ಇ | ಸದರಿ ಮೊತ್ತವನ್ನು ವಸೂಲಿ ಮಾಡಲು ಯಾವ ಕ್ರಮ ಕೈಗೊಳ್ಳಲಾಗಿದೆ; ಎಷ್ಟು ಮೊತ್ತ ವಸೂಲಿ ಮಾಡಲಾಗಿದೆ; ವಸೂಲಾಗದ ಮೊತ್ತವನ್ನು ಯಾರಿಂದ ಯಾವಾಗ ವಸೂಲಿ ಮಾಡಲಾಗುವುದು; ಹಾಗೂ ಈ ಅಕ್ರಮಕ್ಕೆ ಕಾರಣರಾದ ಅಧಿಕಾರಿ ಮೇಲೆ ಕೈಗೊಂಡ ಕ್ರಮಗಳೇನು? (ಸಂಪೂರ್ಣ ಮಾಹಿತಿ ಒದಗಿಸುವುದು). | ಮುಂಗಡ ಮೊತ್ತವನ್ನು NIC ನವದೆಹಲಿಯವರಿಗೆ ಪಾವತಿಸಿದ ನಂತರ ಸಂಸ್ಥೆಯ ಹಿರಿಯ ಅಧಿಕಾರಿಗಳು ರಾಜ್ಯಕ್ಕೆ ಭೇಟಿ ನೀಡಿ, ಬ್ಯಾಂಕಿನ ವ್ಯವಹಾರ ಶೈಲಿಯನ್ನು ಅಧ್ಯಯನ ಮಾಡಿದ ನಂತರ Pilot Project ಕಾರ್ಯವನ್ನು ಕೈಗೊಳ್ಳಲು ಮಾದರಿ ತಂತ್ರಾಂಶವನ್ನು ಒದಗಿಸಿದ್ದರು. Pilot Project ಕಾರ್ಯ ಕೈಗೊಂಡಾಗ ರಾಜ್ಯ ಸರ್ಕಾರ 01/04/2004 ರಿಂದ ಜಾರಿಗೆ ತಂದಿರುವ ಬಡ್ಡಿ ಸಹಾಯಧನ ಯೋಜನೆಯಡಿ ಬರುವ ಖಾತೆಗಳನ್ನು ಗಣಕೀಕರಿಸಲು ಅಡಚಣೆ ಉಂಟಾಗಿತ್ತು. ಈ ತೊಂದರೆಗಳನ್ನು ನಿವಾರಿಸಲು NIC ಸಂಸ್ಥೆಯವರಿಗೆ ಕೋರಲಾಗಿದ್ದು, ಬಡ್ಡಿ ಸಹಾಯಧನ ಯೋಜನೆಗೆ ಸಂಬಂಧಿಸಿದಂತೆ ಹಾಗೂ ಸ್ವಂತ ಬಂಡವಾಳದಿಂದ ನೀಡಿದ ಸಾಲಗಳಿಗೆ ಸಂಬಂಧಿಸಿದಂತೆ ಹಾಲಿ ಇರುವ ತಂತ್ರಾಂಶದಲ್ಲಿ ಈ ಅಂಶಗಳನ್ನು ಅಭಿವೃದ್ಧಿಪಡಿಸಲು ಸಾಧ್ಯವಾಗುವುದಿಲ್ಲವೆಂದು, ಬ್ಯಾಂಕು ಒಪ್ಪಿದಲ್ಲಿ ಹಿಂದೆ ನೀಡಿರುವ ತಂತ್ರಾಂಶದಲ್ಲಿ ಕೆಲವು ಮಾರ್ಪಾಡುಗಳೊಂದಿಗೆ ತಂತ್ರಾಂಶವನ್ನು ಒದಗಿಸಿಕೊಡಲಾಗುವುದೆಂದು ತಿಳಿಸಿ, ಒಪ್ಪದಿದ್ದಲ್ಲಿ ಈಗಾಗಲೇ ಬ್ಯಾಂಕು ತಂತ್ರಾಂಶ ಅಭಿವೃದ್ಧಿಗಾಗಿ ನೀಡಿರುವ ಮುಂಗಡ ಹಣದಲ್ಲಿ ಇಲ್ಲಿಯವರೆಗೆ ವೆಚ್ಚವಾಗಿರುವ ಮೊತ್ತವನ್ನು ಕಡಿತಗೊಳಿಸಿ ಉಳಿದಿರುವ ಮುಂಗಡ ಹಣವನ್ನು ಹಿಂತಿರುಗಿಸಲು ಕ್ರಮವಿಡಲಾಗುವುದೆಂದು ತಿಳಿಸಿರುವುದರಿಂದ ಸದರಿ ವಿಷಯವನ್ನು ದಿ:17/12/2020 ರಂದು ನಡೆದ ಆಡಳಿತ ಮಂಡಳಿ ಸಭೆಗೆ ಮಂಡಿಸಿದ್ದು, NIC ಯವರಿಗೆ ನೀಡಿದ್ದ ಕಾರ್ಯಾದೇಶವನ್ನು ರದ್ದುಪಡಿಸಿ ಉಳಿದಿರುವ ಮುಂಗಡ ಹಣವನ್ನು ವಾಪಸ್ಸ್ ಪಡೆಯಲು ಮತ್ತು ಕೋರ್‌ಬ್ಯಾಂಕಿಗ್ ತಂತ್ರಾಂಶ ಅಳವಡಿಕೆಗೆ ನೂತನವಾಗಿ ಟೆಂಡರ್ ಕರೆದು ಕ್ರಮವಿಡಲು ನಿರ್ಣಯಿಸಲಾಗಿರುತ್ತದೆ. ಆಡಳಿತ ಮಂಡಳಿ ಸಭೆ ತೀರ್ಮಾನಿಸಿದ ಮಾಹಿತಿಯನ್ನು NIC |

| | | |
|---|---|---|
| | | ಸಂಸ್ಥೆಯವರಿಗೆ ತಿಳಿಸಿದ್ದು, ಇಲ್ಲಿಯವರೆಗೆ ಯೋಜನೆಗೆ ಸಂಬಂಧಿಸಿದಂತೆ ಆಗಿರುವ ವೆಚ್ಚವನ್ನು ಕಡಿತಗೊಳಿಸಿ, ಉಳಿದ ಮುಂಗಡವನ್ನು ಹಿಂತಿರುಗಿಸಲು ಸಮ್ಮತಿಸಿರುತ್ತಾರೆ. ಬ್ಯಾಂಕು ನೀಡಿದ್ದ ರೂ.28.90 ಲಕ್ಷ ಮುಂಗಡದಲ್ಲಿ ರೂ.7,38,372/- ಕಡಿತಗೊಳಿಸಿ ಇದಕ್ಕೆ ಸಂಬಂಧಿಸಿದ tax invoice ಗಳನ್ನು ನೀಡಿರುತ್ತಾರೆ. ಉಳಿದ ಮೊತ್ತ ರೂ.21,51,628/- ಗಳನ್ನು NIC ದಿ:26.02.2021 ರಂದು ಬ್ಯಾಂಕಿಗೆ ಮರು ಪಾವತಿಸಿರುತ್ತಾರೆ.<br><br>NIC ಸಂಸ್ಥೆಯವರು ಕಡಿತಗೊಳಿಸಿದ ರೂ.7,38,372/- ಮೊತ್ತವನ್ನು ಸಹ ಬ್ಯಾಂಕಿಗೆ ಹಿಂತಿರುಗಿಸಲು ಅಥವಾ ರಾಜ್ಯ ಬ್ಯಾಂಕಿನ ಶಾಖೆಗಳಿಗೆ ಮತ್ತು ಕೇಂದ್ರ ಕಛೇರಿಗೆ ಉಪಯೋಗವಾಗುವ ತಂತ್ರಾಂಶವನ್ನು ನೀಡಲು ಬ್ಯಾಂಕು ವಿನಂತಿಸಿಕೊಂಡಿರುತ್ತದೆ. ಈ ಕುರಿತಂತೆ NIC ಸಂಸ್ಥೆಯಿಂದ ಯಾವುದೇ ಪ್ರತಿಕ್ರಿಯೆ ವ್ಯಕ್ತವಾಗಿರುವುದಿಲ್ಲ. ಕಡಿತಗೊಳಿಸಿದ ರೂ.7,38,372/-ಗಳನ್ನು ಹಿಂಪಡೆಯಲು ಕ್ರಮ ಕೈಗೊಳ್ಳುತ್ತಿದ್ದು, ಸಂಬಂಧಪಟ್ಟ ಅಧಿಕಾರಿಗೆ ಕಾರಣ ಕೇಳಿ ನೋಟಿಸ್ ಜಾರಿ ಮಾಡಲಾಗಿದ್ದು, ಅಧಿಕಾರಿಯು ಸಮಜಾಯಿಷಿ ಸಲ್ಲಿಸಿರುತ್ತಾರೆ. ಸದರಿಯವರು ಸಲ್ಲಿಸಿರುವ ಸಮಜಾಯಿಷಿಯು ಪರೀಶಿಲನೆಯಲ್ಲಿರುತ್ತದೆ. |

**ಸಂಖ್ಯೆ: ಸಿಒ 234 ಸಿಎಲ್‌ಎಸ್ 2021**

(ಎಸ್.ಟಿ ಸೋಮಶೇಖರ್)

**ಸಹಕಾರ ಸಚಿವರು**